# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್.

MUNJAVU' Kannada Weekly, KOPPA - CHM. ಫೋನ್ : 114

8ನೇ ವರ್ಷ 9ನೇ ಸಂಚಿಕೆ ಕೊಪ್ಪ 15-10-1989 ಭಾನುವಾರ ಬೆಲೆ 60 ಪೈಸೆ

## ಕಮ್ಮರಡಿ: ಅಮಾಯಕ ವ್ಯಕ್ತಿಗೆ ಇ...

ಕಮ್ಮರಡಿ: ಇಲ್ಲಿ ಅ. 8ರಂದು ನವರಾತ್ರಿ ಪ್ರಯುಕ್ತ ಆರ್ಕೆಸ್ಟ್ರಾ ನಡೆಯುತ್ತಿದ್ದಾಗ ಬಂಡಿಗಡಿಯ ಗಣೇಶ ಎಂಬ ವ್ಯಕ್ತಿಯ ಮೇಲೆ ಹಲ್ಲೆ ಮಾಡಿ, ಕತ್ತಿಯಿಂದ ಕಡಿದ ಆರೋಪದ ಮೇಲೆ ಮಂಡಲ ಪ್ರಧಾನ ಕೃಷ್ಣಪ್ಪಗೌಡರ ಮಕ್ಕಳಾದ ಸಾಯಿನಾಥ ಮತ್ತು ಮಂಜುನಾಥ ಹಾಗೂ ಕೇಶವ, ಸತೀಶ, ರಾಜು ಎಂಬವರನ್ನು ಹರಿಹರಪುರ ಠಾಣಾಧಿಕಾರಿ ಟಿ.ಆರ್. ಮಂಜುನಾಥಯ್ಯ ಬಂಧಿಸಿ, ಮುಂದಿನ ತನಿಖೆ ನಡೆಸು ತ್ತಿದ್ದಾರೆ.

ಗಣೇಶ ಈ ಹಿಂದೆ ಪ್ರಧಾನರ ಆಪ್ತ ವಲಯದವನಾಗಿದ್ದು, ಈಚೆಗೆ ಅವಿಶ್ವಾಸ ನಿರ್ಣಯದ ಪ್ರಕರಣದಲ್ಲಿ ಅವರಿಂದ ದೂರ ವಾಗಿದ್ದರಿಂದಲೂ, ಇದರಿಂದ ಉಂಟಾದ ಅಸ ಮಾಧಾನ ಹೊಗೆಯಾಡುತ್ತಿದ್ದು, ಆರ್ಕೆಸ್ಟ್ರಾ ಕೇಳುತ್ತಿದ್ದ ಗಣೇಶನಿಗೆ ಈ ಗುಂಪು ಹಿಂದು ಗಡೆಯಿಂದ ಕೀಟಲೆ ಮಾಡಿದಾಗ ಜಗಳ ಶುರುವಾಗಿ ಅವನನ್ನು ರಸ್ತೆಗೆ ಎಳೆತಂದು ಕತ್ತಿಯಿಂದ ಕಡಿದರೆಂದೂ ಹೇಳಲಾಗಿದೆ.

ಮಂಡಲ ಸದಸ್ಯ ಹೊಸಳ್ಳಿ ವೆಂಕಟೇಶ ಜಗಳ ತಪ್ಪಿಸಿ, ತಲೆಗೆ ಗಾಯವಾಗಿದ್ದ ಗಣೇಶನಿಗೆ ಆಸ್ಪತ್ರೆಯಲ್ಲಿ ಚಿಕಿತ್ಸೆ ನೀಡ ಲಾಯಿತೆಂದು ತಿಳಿದುಬಂದಿದೆ.

ಈ ಭೀಕರ ಹಲ್ಲೆಯಿಂದ ಇಡೀ ಕಮ್ಮರಡಿ ದಿಗ್ಭ್ರಾಂತಿಗೊಂಡಿದೆ.

# ಚಕ್ಕಮಕ್ಕಿ ಅಹಮದ್ ಬಾವಾ ಸಾವಿನ ಸಿ. ಓ. ಡಿ. ತನಿಖೆ ಆರಂಭ :

# ಬಾವಾ ಸಾವಿಗೂ ಅರಣ್ಯ ಇಲಾಖೆಗೂ ಸಂಬಂಧವಿಲ್ಲ—ಡಿಎಫ್‌ಒ

(ವರದಿ : ಬಿ.ಎಸ್. ವಿದ್ಯಾನಂದ ಭಟ್)

**ಬಾಳೆಹೊನ್ನೂರು : ಆಗಸ್ಟ್ ತಿಂಗಳಲ್ಲಿ ನಡೆದ ಚಕ್ಕಮಕ್ಕಿಯ ಅಹಮದ್ ಬಾವನ ಸಾವಿಗೂ ಅರಣ್ಯ ಇಲಾಖೆಗೂ ಯಾವ ಸಂಬಂಧವೂ ಇಲ್ಲವೆಂದು ಕೊಪ್ಪ ಅರಣ್ಯ ವಿಭಾಗದ ಉಪ ಸಂರಕ್ಷಣಾಧಿಕಾರಿ ಕಿಶನ್ ಸಿಂಹ್ ಸುಗರಾ ಇಲ್ಲಿ ಸ್ಪಷ್ಟಪಡಿಸಿದರು**

ಕೊಪ್ಪ ಅರಣ್ಯ ವಿಭಾಗದಲ್ಲಿ ಕಳೆದ 2 ವರ್ಷಗಳಲ್ಲಿ ನಡೆದ ಶ್ರೀಗಂಧ ಕಳ್ಳ ಸಾಗಣೆ ತಡೆ ಕಾರ್ಯಾಚರಣೆಯ ಬಗ್ಗೆ ವಿವರ ನೀಡಲು ಅ. 5ರಂದು ಅವರು ಇಲ್ಲಿ ಕರೆದಿದ್ದ ಪತ್ರಿಕಾ ಗೋಷ್ಠಿಯಲ್ಲಿ ಪತ್ರಕರ್ತರ ಪ್ರಶ್ನೆಗಳಿಗೆ ಉತ್ತರಿಸುತ್ತ ಅವರು ಈ ರೀತಿ ತಿಳಿಸಿದರು.

ದಟ್ಟ ಅರಣ್ಯಗಳಿಂದ ತುಂಬಿರುವ ಈ ಅರಣ್ಯ ವಿಭಾಗದಲ್ಲಿ ಒತ್ತುವರಿ, ಬೆಂಕಿ ಹಾಗೂ ಕಳ್ಳ ಸಾಗಣೆದಾರರಿಂದ ಅರಣ್ಯ ರಕ್ಷಿಸಿಕೊಳ್ಳಲು ಅರಣ್ಯ ಸಿಬ್ಬಂದಿ ಸಾಕಷ್ಟು ಶ್ರಮಿಸುತ್ತಿದೆಯೆಂದು ಅವರು ವಿವರಿಸಿದರು.

1987–88ರಲ್ಲಿ ಶ್ರೀಗಂಧ ಕಳ್ಳ ಸಾಗಣೆಯಲ್ಲಿ ನಿರತವಾಗಿದ್ದ 21 ವಾಹನಗಳನ್ನ ವಶಪಡಿಸಿಕೊಂಡು ಸುಮಾರು 6 ಲಕ್ಷ ರೂ. ಮೊತ್ತದ ಗಂಧವನ್ನೂ, 1988–89ರಲ್ಲಿ ಈವರೆಗೆ 8 ವಾಹನಗಳಿಂದ 5 ಲಕ್ಷ ರೂ ಮೌಲ್ಯದ ಗಂಧವನ್ನೂ, ವಾಹನೇತರ ಸಾಗಣೆಯಲ್ಲಿ 42 ಪ್ರಕರಣಗಳಲ್ಲಿ 62 ಮಂದಿಯಿಂದ 6758 ಕಿಲೊ ಗಂಧವನ್ನೂ ವಶಪಡಿಸಿಕೊಳ್ಳಲಾಗಿದೆಯೆಂದು ಅವರು ವಿವರಿಸಿದರು.

**ಬಾವಾ ಪ್ರಕರಣ**

ಪತ್ರಿಕಾ ಗೋಷ್ಠಿಯಲ್ಲಿ ಹಾಜರಿದ್ದ ಕುದುರೆಮುಖ ಉಪ ವಿಭಾಗದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಎಚ್. ಎಂ. ವಿಶ್ವನಾಥ್ ಅಹಮದ್ ಬಾವಾನ ಬಂಧನಕ್ಕೆ ಸಂಬಂಧಿಸಿದ ಮಾಹಿತಿಗಳನ್ನು ನೀಡಿದರು.

ಆಗಸ್ಟ್ 8ರಂದು ರಾತ್ರಿ 8 ಗಂಟೆಗೆ ಮಾಗುಂಡಿ ಬಳಿಯ ದುರ್ಗಮವಾದ ಹೆಮ್ಮಿಗೆರೆ ಅರಣ್ಯದಲ್ಲಿ ಶ್ರೀಗಂಧ ಕಳ್ಳ ಸಾಗಣೆ ಮಾಹಿತಿಯ ಮೇರೆಗೆ ಕಾದಿದ್ದ ಸಿಬ್ಬಂದಿಗೆ ಬಾವ ಮತ್ತು ಪುತ್ತು ಸಿಕ್ಕಿ ಬಿದ್ದರು. ಆನಂದ್ ಎಂಬವ ಓಡಿ ಹೋದ. ಸಮೀಪದಲ್ಲೇ ಅವರ ಸಿಎಜೆ 8829 ನಂಬರಿನ ಕಾರು ಪತ್ತೆಯಾಯ್ತು. ಅದರಲ್ಲಿ ಶ್ರೀಗಂಧ ಇತ್ತು. ಅರಣ್ಯ ಸಿಬ್ಬಂದಿಯ ವಾಹನ ಕೆಟ್ಟು ಹೋದುದರಿಂದ ಈ ಕಾರಿನಲ್ಲೇ ಆವರುಗಳನ್ನು ಮಾಗುಂಡಿ ಅರಣ್ಯ ಪ್ರವಾಸಿ ಮಂದಿರಕ್ಕೊಯ್ದು ಇಬ್ಬರು ಅರಣ್ಯ ರಕ್ಷಕರ ಕಾವಲಿನಲ್ಲಿ ಕೂಡಿ ಹಾಕಲಾಯಿತು.

ಕೆಟ್ಟು ನಿಂತಿದ್ದ ವಾಹನವನ್ನು ತರಲು ಉಳಿದ ಸಿಬ್ಬಂದಿ ಹೋಗಿದ್ದಾಗ ಬಾವಾ ಮತ್ತು ಪುತ್ತು ಕಾವಲುಗಾರರನ್ನು ಮೋಸಗೊಳಿಸಿ ಪರಾರಿಯಾದರು. ಇದಕ್ಕೆ ಕಾರಣರಾದ ಸಿಬ್ಬಂದಿಯ ಮೇಲೆ ಸೂಕ್ತ ಕ್ರಮ ಜರುಗಿಸಲು ನಿರ್ಧರಿಸಲಾಗಿದೆ ಎಂದೂ ವಿಶ್ವನಾಥ್ ತಿಳಿಸಿದರು.

**ಭದ್ರಾ ನದಿಯಲ್ಲಿ ಶವ**

ಆ. 25ರಂದು ಭದ್ರಾ ನದಿಯಲ್ಲಿ ಕಂಡು ಬಂದ ಶವವೊಂದನ್ನು ಅಹಮದ್ ಬಾವನದೆಂದು ಗುರುತಿಸಲಾಯಿತು. ಈ 17 ದಿನದ ಅವಧಿಯಲ್ಲಿ ಬಾವನ ತಂದೆ ಅಥವಾ ಅವರ ಕಡೆಯ ಯಾರೂ ಪೋಲೀಸಿಗಾಗಲಿ, ಅರಣ್ಯ ಅಧಿಕಾರಿಗಳಿಗಾಗಲಿ ಬಾವನ ಬಂಧನ ಮತ್ತು ಕಣ್ಮರೆ ಬಗ್ಗೆ ದೂರು ನೀಡಿದ್ದಿಲ್ಲ.

ಬಾವನನ್ನು ಅಕ್ರಮವಾಗಿ ಬಂಧಿಸಿಡುವ ಅಥವಾ ಕೊಲ್ಲುವ ಅಥವಾ ಆಕಸ್ಮಾತ್ ಪರಾರಿಯಾಗುವಾಗ ಗುಂಡು ಹಾರಿಸಿದ್ದರೆ ಅದನ್ನು ಮುಚ್ಚಿಡುವ ಆವಶ್ಯಕತೆ ಅರಣ್ಯ ಇಲಾಖೆಗೆ ಇಲ್ಲವೆನ್ನುವ ಅಧಿಕಾರಿಗಳು, ಒಂದು ವೇಳೆ ಆ. 8ರಂದೇ ಬಾವಾನ ಕೊಲೆಯಾಗಿ ಹೊಳೆಗೆ ಹಾಕಲಾಗಿದ್ದರೆ 25ರಂದು ಸಿಕ್ಕ ಶವ (17 ದಿನಗಳ ನಂತರ) ಆ ಸ್ಥಿತಿಯಲ್ಲಿರಲು ಸಾಧ್ಯವಿಲ್ಲ ಎಂದೂ ಹೇಳುತ್ತಾರೆ

**ಕಳ್ಳ ಸಾಗಣೆ ಲಾಬಿಯ ತಂತ್ರ ?**

ಕಳ್ಳಸಾಗಣೆದಾರರ ಲಾಬಿಯು ಉದ್ದೇಶಪೂರ್ವಕವಾಗಿ ಮತ್ತು ಸಂಪೂರ್ಣ ವ್ಯವಸ್ಥಿತವಾಗಿ ಈ ಆರೋಪವನ್ನು ಅರಣ್ಯ ಇಲಾಖೆಯ ಮೇಲೆ ಹೊರಿಸಿ, ಸಿಬ್ಬಂದಿಯನ್ನು ಧೃತಿಗೆಡಿಸಲು ಯತ್ನಿಸಿದೆ. ಅಲ್ಲದೆ ಹಲವು ಸಿಬ್ಬಂದಿಗಳಿಗೆ ಜೀವ ಬೆದರಿಕೆ ಸಹ ಒಡ್ಡಲಾಗಿದೆ. ಆದರೆ ಈ ಬೆದರಿಕೆಗಳಿಂದೆಲ್ಲ ಇಲಾಖಾ ಸಿಬ್ಬಂದಿ ಧೈರ್ಯಗುಂದುವುದಿಲ್ಲವೆಂದೂ, ಕಳ್ಳ ಸಾಗಣೆ ತಡೆಯ ಕಾರ್ಯಾಚರಣೆ ಯಥಾ ರೀತಿ ಮುಂದುವರಿಯುವುದೆಂದೂ ಈ ಹಿರಿಯ ಅಧಿಕಾರಿಗಳು ದೃಢವಾಗಿ ಹೇಳಿದರು

**ಕೆಲ ಕುತೂಹಲಕರ ಸಂಗತಿಗಳು**

ಇದೀಗ ಈ ಪ್ರಕರಣದ ತನಿಖೆಯನ್ನು ಸಿ.ಓ.ಡಿ.ಗೆ ವಹಿಸಲಾಗಿದ್ದು, ಡಿವೈಎಸ್ಪಿಯೊಬ್ಬರು ತನಿಖೆ ಆರಂಭಿಸಿದ್ದಾರೆ. ಈ ಮಧ್ಯೆ ಈ ಪ್ರಕರಣದ ಉದ್ದಕ್ಕೂ ಭಾಗಿಗಳಾಗಿರುವ ಸ್ಥಳೀಯರು ಮತ್ತು ಕೆಲ ಪೋಲೀಸ್ ಮೂಲಗಳ ಪ್ರಕಾರ, ಅರಣ್ಯ ಅಧಿಕಾರಿಗಳ ಈ ಮೇಲಿನ ವಾದಕ್ಕೆ ಪೂರ್ಣ ಪುಷ್ಟಿ ನೀಡುವ ಹಲವು ಕುತೂಹಲಕರ ಸಂಗತಿಗಳು 'ಮುಂಜಾವು'ಗೆ ದೊರೆತಿವೆ.

ಪುತ್ತು ಮತ್ತು ಬಾವಾ ತಪ್ಪಿಸಿಕೊಂಡ ನಂತರ ಪುತ್ತು ಬಂದು ಬಾವಾ ತಪ್ಪಿಸಿಕೊಂಡ ವಿಚಾರ ತಿಳಿಸಿದ್ದರಿಂದಲೇ ಅವರು ಬಾವನ ಶವ ಸಿಗುವವರೆಗೆ ನಿಶ್ಚಿಂತೆಯಿಂದಿದ್ದುದು. ಆತನ ಶವ ಪರೀಕ್ಷೆಗಾಗಿ ಅವರು ಬಣಕಲ್‌ನಿಂದಲೇ ಡಾಕ್ಟರನ್ನು ಕರೆ ತಂದಿದ್ದರು. ಅವರು ಈ ಮರಣ ಗುಂಡಿನಿಂದ ಸಂಭವಿಸಿದ್ದಾಗಿರದೆ, ನೀರಿನಲ್ಲಿ

(4ನೇ ಪುಟಕ್ಕೆ)

## ಪಡಿತರ ವಿತರಣೆ ಸುಧಾರಣೆಗೆ

## ಸಿಪಿಐ ಆಗ್ರಹ

ಕೊಪ್ಪ : ಈ ತಾಲ್ಲೂಕಿನಲ್ಲಿ ಪಡಿತರ ವಸ್ತುಗಳ ವಿತರಣೆ ಅಸಮರ್ಪಕವಾಗಿದ್ದು, ಹಲವು ತಿಂಗಳಿಂದ ಸಕ್ಕರೆ ಎಣ್ಣೆ ವಿತರಣೆಯೇ ಆಗಿಲ್ಲ; ದೀಪಾವಳಿಯೊಳಗೆ ಸುಸೂತ್ರವಾಗಿ ವಿತರಣೆಗೆ ಅಧಿಕಾರಿಗಳು ಕ್ರಮ ಕೈಗೊಳ್ಳಬೇಕು ಎಂದು ಭಾರತ ಕಮ್ಯೂನಿಸ್ಟ್ ಪಕ್ಷದ ಪಟ್ಟಣ ಶಾಖೆ ಆಗ್ರಹಿಸಿದೆ.

ರಾಷ್ಟ್ರಪತಿ ಆಡಳಿತದಲ್ಲಿ ಗಗನಕ್ಕೇರಿರುವ ದಿನ ಬಳಕೆ ವಸ್ತುಗಳ ಬೆಲೆಯ ಕಡಿತಕ್ಕೆ ಆಗ್ರಹಿಸಿದ ಸಭೆ, ಬಾಳಗಡಿ ರಸ್ತೆ ವಿಸ್ತರಿಸಲು ಹಾಗೂ ಕಾನ್ವೆಂಟ್ ರಸ್ತೆಯಲ್ಲಿ ಮೇಲಿನಿಂದ ವಾಹನಗಳ ಓಡಾಟ ನಿಷೇಧಿಸಲು ಒತ್ತಾಯಿಸಿದೆ.

**ಓದುಗರಲ್ಲಿ ವಿನಂತಿ**

ಅಕ್ಟೋಬರ್ 16ರಿಂದ ಪ್ರವಾಸ ಹೋಗುತ್ತಿರುವುದರಿಂದ ನಮ್ಮ ಅ. 22 ಮತ್ತು 29ರ ಸಂಚಿಕೆಗಳು ಪ್ರಕಟವಾಗುವುದಿಲ್ಲ. ಓದುಗರು ಸಹಕರಿಸಬೇಕಾಗಿ ವಿನಂತಿ

—ಸಂಪಾದಕ

## ದಲಿತನ ಜಮೀನಿನ ಬಗ್ಗೆ ಅನಗತ್ಯ ವಿವಾದಕ್ಕೆ ತೆರೆ

ಸೂರ್ಯದೇವಸ್ಥಾನ : ಇಲ್ಲಿನ ದಲಿತ ಕೃಷಿ ಕಾರ್ಮಿಕ ದುಗ್ಗ ಎಂಬವರಿಗೆ ಮಂಜೂರಾಗಿದ್ದ ಮನೆ ದಳಕ್ಕೆ ಹೊಂದಿಕೊಂಡಂತೆ ಸ. ನಂ. 3 ರಲ್ಲಿ ಅವರ ಪತ್ನಿ ಸಿಂಧುರವರಿಗೆ 2 ಎಕರೆ ಭೂಮಿ ಮಂಜೂರಾಗಿತ್ತು. ಅದರ ಬಳಿ ಭೂ ಅಭಿವೃದ್ಧಿ ಬ್ಯಾಂಕ್ ಸಾಲದಿಂದ ಬಾವಿ ತೆಗೆಸಿ, ಕಷ್ಟದಿಂದ ಜಮೀನು ಅಭಿವೃದ್ಧಿ ಪಡಿಸಲು ಈ ಬಡ ಕುಟುಂಬ ಶ್ರಮಿಸುತ್ತಿತ್ತು.

ಈಚೆಗೆ ಪಕ್ಕದ ಸ. ನಂ. 4ರಲ್ಲಿರುವ ಸೂರ್ಯದೇವಸ್ಥಾನ ಶಾಲೆಗೆ ಶಾಲಾ ವನಕ್ಕಾಗಿ ಕಡತವಾಗಿದ್ದು, ಅದಕ್ಕಾಗಿ ಬೇಲಿ ಹಾಕುವಾಗ ಸ್ಥಳೀಯ ಕೆಲವು ಪತಿಗಳಿಂದಾಗಿ ದುಗ್ಗ–ಸಿಂಧುರವರ ಭೂಮಿಯನ್ನೂ ಕಬಳಿಸಲು ಯತ್ನ ನಡೆದಿತ್ತು.

ದಲಿತ ಕುಟುಂಬವೊಂದಕ್ಕೆ ಕಿರುಕುಳ ನೀಡಲೆಂದೇ ಅನಗತ್ಯವಾಗಿ ಸೃಷ್ಟಿಯಾಗಿದ್ದ ಈ ವಿವಾದವನ್ನು ಕೊಪ್ಪ ತಹಸೀಲ್ದಾರ್ ಜಿ. ಎಸ್. ನಾಯಕ್ ಅವರು ಸೆ. 30 ರಂದು ಬಗೆಹರಿಸಿದ್ದಾರೆಂದು ತಿಳಿದು ಬಂದಿದೆ.



**ಕೊಪ್ಪ ತಾ|| ಸಾರ್ವಜನಿಕ ಹಿತರಕ್ಷಣಾ ಹೋರಾಟ ಸಮಿತಿ**

## ಸಾರ್ವಜನಿಕರ ಗಮನಕ್ಕೆ

ಕೊಪ್ಪದ ವೀರಭದ್ರ ದೇವಸ್ಥಾನದ ಬಗ್ಗೆ 'ಸಾರ್ವಜನಿಕರಿಂದ' ಎಂಬ ಹೆಸರಲ್ಲಿ ಅರ್ಜಿಯೊಂದು ಅಧಿಕಾರಿಗಳಿಗೆ ಹೋಗಿದ್ದು, ಅದರಲ್ಲಿ ಮೇಲ್ಕಂಡ ಸಮಿತಿಯ ಅಧ್ಯಕ್ಷರ ಸಹಿ ಎಂಬುದಾಗಿ ಒಂದು ಫೋರ್ಜರಿ ಸಹಿ ಇರುವುದು ನಮ್ಮ ಗಮನಕ್ಕೆ ಬಂದಿದೆ. ಈ ವಿಚಾರದಲ್ಲಿ ಸಮಿತಿಗೂ ಈ ಅರ್ಜಿಗೂ ಯಾವುದೇ ಸಂಬಂಧವಿಲ್ಲವೆಂದು ಸ್ಪಷ್ಟಪಡಿಸುತ್ತೇವೆ.

ಎ. ಜಿ. ಗೋಪಾಲಗೌಡ,
ಪ್ರಧಾನ ಕಾರ್ಯದರ್ಶಿ.

ಎಂ. ಎಸ್. ಕೋದಂಡರಾಂ
ಅಧ್ಯಕ್ಷರು.

# ಪರಿಪೂರ್ಣ ಕಲಾವಂತಿಕೆಯ ನೃತ್ಯ ಪ್ರದರ್ಶನ

ಜಯಪುರದಲ್ಲಿ ಈ ಸಲದ ಗಣೇಶೋತ್ಸವದ ಕೊನೆಯ ದಿನ ನಡೆದ ವಿದ್ವಾನ್ ಸುಧೀರ್ ಕುಮಾರ್ ಅವರ ಭರತ ನಾಟ್ಯ ಕಾರ್ಯಕ್ರಮ ಶುದ್ಧ ಶಾಸ್ತ್ರೀಯವಾದರೂ ಸುತ್ತ ಮುತ್ತಲ ಅಪಾರ ಸಂಖ್ಯೆಯ ಕೃಷಿ ಕಾರ್ಮಿಕ ಸಮೂಹವೂ ಸೇರಿದಂತೆ ಅಜ್ಞ-ಪ್ರಾಜ್ಞರೆಲ್ಲರನ್ನೂ ಮಂತ್ರಮುಗ್ಧರನ್ನಾಗಿಸಿತು.

1988ರ ಭರತ ನಾಟ್ಯ ವಿದ್ವತ್ ಪರೀಕ್ಷೆಯಲ್ಲಿ 3ನೇ ರ್‍ಯಾಂಕ್ ಪಡೆದ ಜಯಪುರದವರೇ ಆದ ಈ ತರುಣ ಕಲಾವಿದ ತನ್ನ ಹುಟ್ಟೂರಿನ ಕಾರ್ಯಕ್ರಮವೆಂಬ ಅಭಿಮಾನವನ್ನೂ ಸೇರಿಸಿಕೊಂಡು, 4 ಗಂಟೆಗೂ ಹೆಚ್ಚು ಕಾಲ, ಭರತ ನಾಟ್ಯದ ಮುದ್ರೆ-ವಿನ್ಯಾಸಗಳ ಅರ್ಥ ವಿವರಣೆಯೊಂದಿಗೆ ವಿವರವಾಗಿ ಕಾರ್ಯಕ್ರಮ ನೀಡಿದರು. ಮಧ್ಯೆ ಮಧ್ಯೆ ಹನಿದ ತುಂತುರು ಮಳೆಗೂ ಚದುರದೆ ಕುಳಿತು ಕಾರ್ಯಕ್ರಮ ವೀಕ್ಷಿಸಿದ ಮೂರ್ನಾಲ್ಕು ಸಾವಿರದಷ್ಟಿದ್ದ ಜನ ಸ್ತೋಮ ಈ ಕಾರ್ಯಕ್ರಮದ ಜನಪ್ರಿಯತೆಗೆ ಸಾಕ್ಷಿಯಾಗಿತ್ತು.

ಶಾಸ್ತ್ರೀಯವಾಗಿಯೇ ನಡೆದ ಇಡೀ ಕಾರ್ಯಕ್ರಮದಲ್ಲಿ ಅಲರಿಪು, ಜತಿಸ್ವರ, ತಿಲ್ಲಾನಗಳ ಶಾಸ್ತ್ರೀಯ ನಿರೂಪಣೆಯಲ್ಲದೆ, ಅವುಗಳಿಗೆ ಅಳವಡಿಸಿದ ಹಲವು ಕೀರ್ತನೆಗಳು ಮತ್ತು ನೃತ್ಯ ರೂಪಕಗಳೂ ಇದ್ದವು. "ಭಾವಯಾಮಿ ರಘುರಾಮಂ" ಗೀತೆಗೆ ಅಳವಟ್ಟ ದಶಾವತಾರ ಮತ್ತು ಸಮುದ್ರ ಮಥನದ ಅಭಿನಯ, ಕನಕದಾಸರ "ಬಾಗಿಲನು ತೆರೆದು" ಕೀರ್ತನೆಯನ್ನು ನೃತ್ಯಕ್ಕೆ ಅಳವಡಿಸಿದ್ದು, ಜನಪ್ರಿಯವೂ ಅಷ್ಟೇ ಕ್ಲಿಷ್ಟವೂ ಆದ ನಾಗ ನೃತ್ಯ ಮುಂತಾದುವೆಲ್ಲ ಜನ ಮನ ರಂಜಿಸಿದ್ದಲ್ಲದೆ ಈ ಪ್ರತಿಭಾವಂತನ ಕಲಾ ಪ್ರಾವೀಣ್ಯಕ್ಕೆ ಉದಾಹರಣೆಯಾಗಿದ್ದವು.

'ಬಾಗಿಲನು ತೆರೆದು' ಕೀರ್ತನೆಗೆ ನೀಡಿದ ಭಾವಾಭಿನಯವಂತೂ ಪ್ರೇಕ್ಷಕರನ್ನು ಕನಕನಿಗೊಲಿದ ಉಡುಪಿಕೃಷ್ಣನ ಸಾನ್ನಿಧ್ಯಕ್ಕೇ ಕರೆದೊಯ್ದಂತೆನಿಸಿತು. ಸಂಗೀತಗಾರರ ತೀಸ್ಕಾರಕ್ಕೆ ತುತ್ತಾಗಿದ್ದ ದಾಸರ ಕೀರ್ತನೆಯೊಂದಕ್ಕೆ ಶಾಸ್ತ್ರೀಯ ಭರತ ನಾಟ್ಯದ ಅಭಿನಯ ಸಾಧ್ಯ ಎಂಬುದೇ ಒಂದು ಸೋಜಿಗದ, ಆದರೆ ಎಲ್ಲರ ಕಣ್ತೆರೆಸಬಹುದಾದ ಸಂಗತಿ.

ಆದರೆ ನಾಗ ನೃತ್ಯಕ್ಕೆ ತಮಿಳಿನ 'ಆಡು ಪಾಂಬೆ' ಎಂಬ ಹಾಡಿನ ಬದಲು ಕನ್ನಡದಲ್ಲಿ ಜನಪ್ರಿಯವಾಗಿರುವ 'ಆಡು ನಾಗ, ನಲಿದಾಡು ನಾಗ' ಎಂಬ ಗೀತೆಯನ್ನೇಕೆ ಅಳವಡಿಸಲಿಲ್ಲವೋ ಗೊತ್ತಾಗಲಿಲ್ಲ.

ಕಾರ್ಯಕ್ರಮದ ನಡುವೆ ಹುಟ್ಟೂರಿನ ಅಭಿಮಾನಿಗಳು ಏರ್ಪಡಿಸಿದ್ದ 'ಸನ್ಮಾನ'ದ ಅವಕಾಶವನ್ನು ಸುಧೀರ್ ತನ್ನ ಈ ಶ್ರೇಯಸ್ಸಿಗೆ ಕಾರಣರಾದವರನ್ನು ಸನ್ಮಾನಿಸಿ ಕೃತಜ್ಞತೆ ಸೂಚಿಸಲು ಬಳಸಿಕೊಂಡದ್ದು [illegible] ಮೆಚ್ಚುಗೆ ಗಳಿಸಿತು. ಅಷ್ಟೇನೂ '[illegible]ಕಾರ್ಕ' ಎನ್ನಿಸದಿದ್ದ ಕಲೆಯ ಅಭ್ಯಾಸ[illegible] ತನ್ನ ಪಾಡಿಗೆ ತನ್ನನ್ನು ಬಿಟ್ಟ [illegible] ತಂದೆ-ತಾಯಿಗಳನ್ನು ಸ್ಮರಿಸಿದ ಸುಧೀರ್ ಮೊದಲಿಗೆ ತನ್ನ ಕಲೆ ಗುರುತಿಸಿ ಹುರಿದುಂಬಿಸಿದ ಡಾ|| ಎ. ಆರ್. ಶೆಟ್ಟಿ, ತಮ್ಮ ಕುಟುಂಬದ ಹಿತೈಷಿ ಕೆ. ಸಿ. ರಾಮಪ್ಪ ಗೌಡರು ಹಾಗೂ ತನ್ನ ಕಲಾಗುರು ಲಲಿತಾ ದೊರೈ ಅವರುಗಳಿಗೆ ಗಂಧದ ಹಾರ ಹಾಕಿ ಕಾಲು ಮುಟ್ಟಿ ನಮಸ್ಕರಿಸಿ ಅವರನ್ನು ಸನ್ಮಾನಿಸಿದರು. ಅಂತೆಯೇ ಹಿಮ್ಮೇಳದ ಕಲಾವಿದರಾದ ಅಂತರ ರಾಷ್ಟ್ರೀಯ ಖ್ಯಾತಿಯ ಕೊಳಲು ವಾದಕ ವಿದ್ವಾನ್ ಶ್ರೀನಿವಾಸ ಮೂರ್ತಿ, ಮೃದಂಗ ವಿದ್ವಾನ್ ತಂಗವೇಲು, ಸಂಗೀತ ವಿದ್ವಾನ್ ಶ್ರೀವತ್ಸ ಇವರುಗಳನ್ನೂ ಹಾರ ಹಾಕಿ ಸನ್ಮಾನಿಸಿದರು.

ಒಟ್ಟಾರೆ ಕಾರ್ಯಕ್ರಮ ಈ ಸುತ್ತಮುತ್ತಲ ಹತ್ತಾರು ಊರುಗಳ ಕಲಾಭಿಮಾನಿಗಳಿಗೆ ಒಂದು ಸ್ಮರಣೀಯ ಅನುಭವ ನೀಡಿತು. ಅಷ್ಟೇ ಅಲ್ಲ, ಅರ್ಧಂಬರ್ಧ ಕಲಿತು, ಒಂದಷ್ಟು ಸಿನಿಮಾ ಹಾಡುಗಳಿಗೂ 'ನೃತ್ಯ' ಸಂಯೋಜಿಸಿಕೊಂಡು ಭರತ ನಾಟ್ಯವೆಂದು ಪ್ರದರ್ಶಿಸುವ ಕಾರ್ಯಕ್ರಮಗಳನ್ನೇ ಕಂಡಿದ್ದ ಪ್ರೇಕ್ಷಕರಿಗೆ ಈ ಕಲೆಯ ಗಹನವಾದ, ಶ್ರೇಷ್ಠ ನವರಸಭರಿತವಾದ ಮಗ್ಗುಲನ್ನೂ ನೋಡುವ ಅಪೂರ್ವ ಅವಕಾಶವೊಂದು ಲಭಿಸಿತು.

**'ಭಾರತೀಯ ಸಂಸ್ಕೃತಿ' ಅಲ್ಲ?**

ಮಲೆನಾಡಿನ ಈ ಪ್ರಾಂತ್ಯದ ಎಲ್ಲ ಭಾವುಕ-ಆಸ್ತಿಕ ವ್ಯಕ್ತಿಗಳಂತೆಯೇ, ಹುಟ್ಟೂರಿನ ಈ ಕಾರ್ಯಕ್ರಮಕ್ಕೆ ಮೊದಲು 'ಶೃಂಗೇರಿ ಶಾರದಾಂಬೆಯ ಎದುರು ನರ್ತಿಸಬೇಕೆಂದು' ಹರಕೆ ಹೊತ್ತಿದ್ದ ಸುಧೀರ್‌ಗೆ ಆ ಅವಕಾಶ ಮಾತ್ರ ದಕ್ಕಲಿಲ್ಲ. ಈ ಬಗ್ಗೆ ಮಠದ ಆಡಳಿತಾಧಿಕಾರಿಗಳಲ್ಲಿ ಕೋರಿಕೆ ಸಲ್ಲಿಸಿದಾಗ, "ಡ್ಯಾನ್ಸ್‌ಗಳಿಗೆಲ್ಲ ನಾವು ಅವಕಾಶ ಕೊಡುವುದಿಲ್ಲ. ಅದು ಭಾರತೀಯ ಸಂಸ್ಕೃತಿಯೂ ಅಲ್ಲ!" ಎಂಬ ತಿರಸ್ಕಾರ ಭರಿತ 'ವ್ಯಾಖ್ಯಾನ' ಅವರಿಂದ ಬಂದಿತಂತೆ!! (ಕೊನೆಗೆ ಯಾರಲ್ಲೂ ಹೇಳದೆ ಸೀದಾ ಶಾರದೆಯೆದುರು 'ಇದ್ದ ವೇಷದಲ್ಲೇ' ಸ್ವಲ್ಪ ಹೊತ್ತು ನರ್ತಿಸಿ ಹರಕೆ ತೀರಿಸಿಕೊಂಡರಂತೆ, ಪಾಪ ಈ ವಿದ್ವಾನ್.)

'ಜಗದ್ಗುರು' ಪೀಠವೆಂದು ಯಾರ 'ಸಂಸ್ಕೃತಿಯನ್ನು ಈ ಮಠ ಪ್ರತಿನಿಧಿಸು

(3ನೇ ಪುಟಕ್ಕೆ)

# 'ಅಮೃತಮತಿ' ಯಕ್ಷಗಾನ ಧ್ವನಿ ಸುರುಳಿ

ಜೈನ ಕವಿ ಜನ್ನನ 'ಯಶೋಧರ ಚರಿತ್ರೆ' ಆಧರಿಸಿದ ಕತೆಯನ್ನು ಯಕ್ಷಗಾನಕ್ಕೆ ಅಳವಡಿಸಿ ಪ್ರಸಿದ್ಧ ಭಾಗವತರಾದ ಕಾಳಿಂಗ ನಾವಡರ ಭಾಗವತಿಕೆಯೊಂದಿಗೆ 'ಅಮೃತಮತಿ' ಎಂಬ ಯಕ್ಷಗಾನ ಕ್ಯಾಸೆಟ್ (ಧ್ವನಿ ಸುರುಳಿ) ಇತ್ತೀಚೆಗೆ ಬಿಡುಗಡೆಯಾಗಿದೆ. ಇದರ ಸಂಭಾಷಣೆ ಮತ್ತು ನಿರ್ದೇಶನವನ್ನು ಮಲೆನಾಡಿನವರೇ ಆದ ಅರಳುವ ಪ್ರತಿಭೆ, ಬೇಗಾರಿನ ಎಸ್. ವಿ. ರಮೇಶ್ ನಿರ್ವಹಿಸಿದ್ದಾರೆ.

ಯಾರೂ ನಿರೀಕ್ಷಿಸಬಹುದಾದಂತೆ ಈ ಕ್ಯಾಸೆಟ್‌ನ ಪ್ರಮುಖ ಆಕರ್ಷಣೆ ಮತ್ತು ಆಧಾರ ಸ್ತಂಭ ಭಾಗವತ ನಾವುಡರೇ. ಅವರ ಬಗ್ಗೆ ಎರಡು ಮಾತಿಲ್ಲ. ವಿವಿಧ ರಾಗಗಳನ್ನು ಉತ್ತಮವಾಗಿ ಹಾಡಿದ್ದಾರೆ ಯಾವ ಸಾಹಿತ್ಯವನ್ನು ಕೊಟ್ಟರೂ ಯಕ್ಷಗಾನದ ಧಾಟಿಯಲ್ಲಿ ಹಾಡಬಲ್ಲವರೆಂದು ತೋರಿಸಿ ಕೊಟ್ಟಿದ್ದಾರೆ.

ಕ್ಯಾಸೆಟ್‌ನ ಇತರ ಅಂಶಗಳಲ್ಲಿ ಕೆಲವು ಲೋಪಗಳನ್ನು ಗುರುತಿಸಬಹುದು. ಮುಖ್ಯವಾಗಿ, ಸಂಭಾಷಣೆ ಉತ್ತಮವಾಗಿದ್ದರೂ ಅಲ್ಲಲ್ಲಿ ಪದ್ಯಗಳಿಗಿಂತ ಸಂಭಾಷಣೆಯೇ ಮೊಟಕಾಗಿದೆ. ಸ್ವಲ್ಪ ದೀರ್ಘ ಸಂಭಾಷಣೆಗಳನ್ನು ಕೊಟ್ಟಿದ್ದರೆ ಶ್ರೋತೃಗಳಿಗೆ ಕಥೆಯನ್ನು ಅರ್ಥಮಾಡಿಕೊಳ್ಳಲು ಸುಲಭವಾಗುತ್ತಿತ್ತು. ಬಹುಶಃ ಯಕ್ಷಗಾನಕ್ಕೆ ಸ್ವಲ್ಪ ಅನನುಭವಿಗಳಾದ ಕಲಾವಿದರನ್ನು ದೃಷ್ಟಿಯಲ್ಲಿಟ್ಟುಕೊಂಡು ಹೀಗೆ ಮಾಡಿದ್ದಾರೋ ಏನೋ.

ಚಿತ್ರನಟ ಅರವಿಂದರ ಅಷ್ಟಾವಕ್ರನ ಪಾತ್ರ ಮೊದಲಿಗೆ ದಕ್ಷಿಣ ಕನ್ನಡದ ಕನ್ನಡ ಬಳಸಿ, ಅಮೃತಮತಿಯೊಂದಿಗಿನ ಸಂಭಾಷಣೆಯಲ್ಲಿ ಅಚ್ಚ ಕನ್ನಡ ಬಳಸಿರುವುದನ್ನು ಪ್ರಾಯಶಃ ನಿರ್ದೇಶಕರು ಗಮನಿಸಿದಂತೆ ಕಾಣುವುದಿಲ್ಲ. ವೈಶಾಲಿಯವರ ಅಮೃತಮತಿ ಪಾತ್ರದ ಮಾತುಗಳು ಸ್ವಲ್ಪ ನಾಟಕೀಯವೆನ್ನಿಸಿದರೂ ಹೃದಯಕ್ಕೆ ನಾಟುವಂತಿವೆ. ರಾಜನ ಪಾತ್ರ ನಿರ್ವಹಿಸಿದ ವೆಂಕಟೇಶ ಪ್ರಸನ್ನ ಸಂಭಾಷಣೆಯನ್ನು ಅಲ್ಲಲ್ಲಿ ಕಷ್ಟಪಟ್ಟು ಹೇಳಿದಂತಿದ್ದರೂ ಪಾತ್ರಕ್ಕೆ ತಕ್ಕಮಟ್ಟಿಗೆ ಜೀವ ತುಂಬಿದ್ದಾರೆ. ರಾಜಮಾತೆ ಪಾತ್ರದವರು ಮಾತ್ರ ಸಂಭಾಷಣೆಯನ್ನು ನೇರವಾಗಿ ಓದಿದಂತಿದೆ.

ನಿರ್ದೇಶಕ ರಮೇಶ್ ಈ ಕೆಲವು ಅಂಶಗಳನ್ನು ಸೂಕ್ಷ್ಮವಾಗಿ ಅವಲೋಕಿಸಿ ತಿದ್ದುಪಡಿ ಮಾಡಿಕೊಳ್ಳುವ ಜೊತೆಗೆ, ಸಾಹಿತ್ಯವನ್ನು (ಮುಖ್ಯವಾಗಿ ಯಕ್ಷಗಾನ ಸಾಹಿತ್ಯವನ್ನು) ಇನ್ನೂ ಉತ್ತಮವಾಗಿ ಅಭ್ಯಾಸ ಮಾಡಿದ್ದಾದರೆ ಈ ದಿಸೆಯಲ್ಲಿ ಇನ್ನೂ ಹೆಚ್ಚಿನ ಯಶಸ್ಸು ಸಾಧಿಸಬಲ್ಲರೆಂಬುದರಲ್ಲಿ ಸಂಶಯವಿಲ್ಲ. ಆದಷ್ಟೂ ಸ್ಥಳೀಯ ಕಲಾವಿದರನ್ನು ಆಯ್ದುಕೊಂಡರೆ ಧ್ವನಿ ಸುರುಳಿ

**ವಿಮರ್ಶೆ :**
**ಡಾ|| ಎಚ್. ಜಿ. ಶೇಷಗಿರಿ**

ಯನ್ನು ಇನ್ನೂ ಉತ್ತಮವಾಗಿ ನಿರ್ಮಿಸಲು ಸಾಧ್ಯವಾಗುತ್ತದಲ್ಲದೆ, ಮಲೆನಾಡಿನ ಯುವಕ-ಯುವತಿಯರ ಪ್ರತಿಭೆ ಅರಳಲೂ ಅವಕಾಶವಾಗುತ್ತದೆ.

ಒಟ್ಟಿನಲ್ಲಿ ಇದೊಂದು ನವ್ಯ ಪ್ರಯೋಗ ಮಾತ್ರವಲ್ಲ, ಭರವಸೆ ಹುಟ್ಟಿಸುವ ಪ್ರಯತ್ನ ಕೂಡ. ಇಂಥ ಆರಂಭಿಕ ಯತ್ನದಲ್ಲಿ ತೂರಿಕೊಳ್ಳುವ ಈ ಕೆಲವು ಲೋಪದೋಷಗಳನ್ನು 'ಹಂಸಕ್ಷೀರ ನ್ಯಾಯ'ದಿಂದ ಪರಿಗ್ರಹಿಸುವ ಸಹೃದಯತೆಯೂ ಯಕ್ಷಗಾನದ ಅಭಿಮಾನಿಗಳಲ್ಲಿ ಇರುವುದೆಂದು ಆಶಿಸಬಹುದು.

**ಅಲೆವ ಮನ**
**● 'ರಾಮು'**

# ಸುಂದರ ಗ್ರಾಮ

ಆತ್ಮೀಯ

ಹಿಂದಿನ ಬಾರಿ, ಮಲೆನಾಡ ಪ್ರತಿಯೊಂದು ಗ್ರಾಮವನ್ನೂ ಹೇಗೆ ಒಂದೊಂದು ಸುಂದರ ಗ್ರಾಮವನ್ನಾಗಿ ಪರಿವರ್ತಿಸಬಹುದು ಎನ್ನುವುದರ ಬಗ್ಗೆ ನನ್ನ ಅನಿಸಿಕೆ ಹೇಳುತ್ತೇನೆಂದು ಬರೆದಿದ್ದೆನಲ್ಲ? (ಆಗಲೇ ಬಹಳ ದಿನವಾಯಿತು; ಮರೆತು ಬಿಟ್ಟೆಯೇನೋ!) ಸಾಮಾಜಿಕ ಅರಣ್ಯ ಇಲಾಖೆಯನ್ನು ಸಂಪರ್ಕಿಸಿ, ನಿನ್ನ ಊರಿನ ಶಾಲೆಯ ಉಪಾಧ್ಯಾಯ ವೃಂದದವರ ಸಹಾಯ ಪಡೆದು, ಉಪಯುಕ್ತ ಸಸಿಗಳನ್ನು ಮಕ್ಕಳಿಂದ ನಿನ್ನ ಊರಲ್ಲಿ ನೆಡಿಸು. ಮಕ್ಕಳಲ್ಲಿಯೂ ಪರಿಸರ ಜಾಗೃತಿ ಸಣ್ಣ ಮಟ್ಟದಲ್ಲಿಯೇ ಆರಂಭವಾಗುತ್ತದೆ. ಸುತ್ತ ಬೇಲಿ ಹಾಕುವುದನ್ನೂ ಮರೆಯಬೇಡ! ರಸ್ತೆ ಪಕ್ಕದಲ್ಲೂ, ಶಾಲೆ, ಆಸ್ಪತ್ರೆ ಮತ್ತು ಇತರೆ ಸಾರ್ವಜನಿಕ ಸ್ಥಳಗಳಲ್ಲೂ ಕಲಾತ್ಮಕವಾಗಿ ನೆಡಿಸು. ಗುಲ್‌ಮೋಹರ್, ಮೇಫ್ಲವರ್ ನೆಡಬಹುದು; ಮಾವು, ಹಲಸು ನೆಡಬಹುದು.

ನಿನ್ನ ಗ್ರಾಮದಲ್ಲಿ ಯಾವುದಾದರೂ ಐತಿಹಾಸಿಕ ಸ್ಥಳವಿದ್ದಲ್ಲಿ ಅದರ ಬಗ್ಗೆ ಮಾಹಿತಿ ಸಂಗ್ರಹಿಸು. ಮೊದಲು ಊರವರಿಗೆ ಆ ಸ್ಥಳದ ಇತಿಹಾಸದ ಬಗ್ಗೆ ತಿಳಿಸುವುದು ಅಗತ್ಯವೆನಿಸುತ್ತದೆ. ಒಂದು ಉದಾಹರಣೆ : ಕೊಪ್ಪ ತಾಲ್ಲೂಕಿನ ಉತ್ತಮೇಶ್ವರ ಎಂಬಲ್ಲಿ-ಹಾಳು ಬಿದ್ದ ಬಸದಿಗಳು, ವೀರಶೈವ ಮಠ ಇದ್ದ ಕುರುಹು ನನ್ನ ಕುತೂಹಲ ಕೆರಳಿಸಿತು. ಅದರ ಬಗ್ಗೆ ಕೆದಕಿ ನೋಡಿದಾಗ ಈ ಪ್ರಾಂತ್ಯ ಕಾರ್ಕಳದ ಭೈರವರಸುವಿನ ಆಡಳಿತಕ್ಕೆ ಒಳಪಟ್ಟಿತ್ತಂತೆ ! ಹಾಳು ಬಿದ್ದ ಬಸದಿಯ ಸುತ್ತಲೂ ಒಂದು ಸುಂದರ ಮಕ್ಕಳ ಉದ್ಯಾನವನ ನಿರ್ಮಿಸಬಹುದು. ಮಕ್ಕಳು ಆಟವಾಡಲು ಮತ್ತು ನಿಸರ್ಗದ ಬಗ್ಗೆ ಕಲಿಯಲು ತಕ್ಕ ವಾತಾವರಣ ನಿರ್ಮಿಸಬಹುದು.

ಹೀಗೆ, ಹತ್ತು ಹಲವಾರು ಕ್ರಿಯಾತ್ಮಕ ಚಟುವಟಿಕೆಗಳಿಂದ ಹಳ್ಳಿಗಳನ್ನು ಸುಂದರಗೊಳಿಸಬಹುದು. ವಾರಕ್ಕೊಮ್ಮೆ ಗ್ರಾಮದವರು ಒಂದು ಕಡೆ ಕಲೆತು, ಕೃಷಿ, ವಿಜ್ಞಾನ ಇವುಗಳ ಬಗ್ಗೆ ಚರ್ಚೆ, ಉಪನ್ಯಾಸ, ಸ್ಲೈಡ್ಸ್ ಪ್ರದರ್ಶನ, ನಾಟಕ, ಹಾಡು, ಕೋಲಾಟ, ........ ಇಂಥ ಕ್ರಿಯಾತ್ಮಕ ಚಟುವಟಿಕೆಯಲ್ಲಿ ಭಾಗವಹಿಸಬಹುದು.

ಗೆಳೆಯಾ ನೀನೂ ನಿನ್ನ ಹಳ್ಳಿಯಲ್ಲಿ ಇಂಥ ಕ್ರಿಯೆಗಳ ಸರಪಳಿ ಜೋಡಿಸಲು ಪ್ರಾರಂಭಿಸಬಾರದೇಕೆ? ನಿನ್ನ ಊರಲ್ಲಿ ಆದ ಪ್ರಗತಿಯ ಬಗ್ಗೆ ಸ್ವಯಂ ಸೇವಾ ಕೇಂದ್ರ ಉತ್ತಮೇಶ್ವರ ಕೊಪ್ಪ ತಾ|| ಈ ಸಂಸ್ಥೆಗೆ ಅಥವಾ ಸಂಪಾದಕರು 'ಮುಂಜಾವು' ಕೊಪ್ಪ ಇವರಿಗೆ ತಿಳಿಸುವೆಯಾ?

ಇಂತಿ ನಿನ್ನವ,
'ರಾಮು'

**ಓದುಗರ ಪತ್ರಗಳು**

## ಪ್ರತಿಭಾನ್ವಿತ ಬಾಲಕಿಯ ಚಿಕಿತ್ಸೆಗೆ ನೆರವಾಗಿ

ಮಾನ್ಯರೆ,

ನಮ್ಮ ಶಾಲೆಯ 9ನೇ ತರಗತಿ ವಿದ್ಯಾರ್ಥಿನಿಯಾದ ಕು॥ ಅನುಸೂಯ, (ಸಿಂಗಪ್ಪ ಗೌಡರ ಮಗಳು, ಹಂಚನೂರು) ತಾ॥ 2-9-89ರಂದು ಶಾಲೆಗೆ ಬರುವಾಗ ದಾರಿಯಲ್ಲಿ ವಾಹನ ಅಪಘಾತಕ್ಕೆ ತುತ್ತಾಗಿ, ಕೈ-ಕಾಲುಗಳ ಮೂಳೆ ಮುರಿದಿರುವ ಆಕೆಯನ್ನು ಚಿಕಿತ್ಸೆಗಾಗಿ ಮಣಿಪಾಲದ ಆಸ್ಪತ್ರೆಗೆ ಸೇರಿಸಲಾಗಿದೆ.

ಈಕೆಯ ತಂದೆ-ತಾಯಿಗಳು ತುಂಬಾ ಬಡವರಾಗಿ ಈಕೆಯ ಚಿಕಿತ್ಸೆಯ ವೆಚ್ಚ ಭರಿಸಲು ಅಶಕ್ತರಾಗಿದ್ದು, ದಾನಿಗಳು ಉದಾರವಾಗಿ ಧನ ಸಹಾಯ ಮಾಡಿ ಈ ಪ್ರತಿಭಾವಂತ ವಿದ್ಯಾರ್ಥಿನಿಯ ಬಾಳಿಗೆ ಬೆಳಕು ತೋರಲು ನೆರವಾಗಬೇಕಾಗಿ ವಿನಂತಿಸುತ್ತೇವೆ. ನಿಮ್ಮ ಕೊಡುಗೆಗಳನ್ನು ಈ ಕೆಳಕಂಡ ವಿಳಾಸಕ್ಕೆ ಕಳಿಸಲು ವಿನಂತಿ.

**ಮುಖ್ಯೋಪಾಧ್ಯಾಯರು,**
ಸರ್ಕಾರಿ ಪ್ರೌಢಶಾಲೆ, ಅಗಳಗಂಡಿ,
ಕೊಪ್ಪ ತಾ॥, ಚಿಕ್ಕಮಗಳೂರು ಜಿಲ್ಲೆ.

# ಯಡಗೆರೆ-ನಾಗರಮಕ್ಕಿ ವಿದ್ಯುತ್ ಸಮಸ್ಯೆ ನಿವಾರಣೆಗೆ ಕ್ರಮ

[ಕೊಪ್ಪ-ಸಿದ್ಧರಮಠ-ಕಮಲಾಪುರ-ಹಳ್ಳಿಬೈಲು ವಿದ್ಯುತ್ ಮಾರ್ಗದ ಕೆಲ ಹಳ್ಳಿಗಳಿಗೆ ವಿದ್ಯುತ್ ಪೂರೈಕೆ ಕೆಲವು ತಿಂಗಳುಗಳಿಂದ ಇಲ್ಲದಿದ್ದುದು ಹಾಗೂ ಅಲ್ಲಿನ ಅಡಿಕೆ ತೋಟವೊಂದರ ಮೂಲಕ ಹಾದು ಹೋಗಿರುವ ವಿದ್ಯುತ್ ಲೈನನ್ನು ಬದಲಿಸಿ, ತೋಟದ ಹೊರ ಭಾಗದಿಂದ ಹಾಕಲು ಕಂಬ, ಹೊಂಡ ಎಲ್ಲ ಸಿದ್ಧತೆಯನ್ನೂ ತೋಟದ ರೈತರೇ ಮಾಡಿದ್ದಾಗ್ಯೂ ಇನ್ನೂ ಈ ಕೆಲಸ ಆಗದಿರುವುದು—ಈ ಕುರಿತು ನಮ್ಮ ಪತ್ರಿಕೆಯಿಂದ ನ.ರಾ ಪುರ ಕ.ವಿ.ಮಂ. ಶಾಖಾಧಿಕಾರಿ ಪ್ರಕಾಶ್ ಅವರಿಗೆ ಬರೆದಿದ್ದ ಪತ್ರಕ್ಕೆ ಅವರ ಉತ್ತರ ಇಲ್ಲಿದೆ. —ಸಂ.]

ಮಾನ್ಯರೆ,

ನಿಮ್ಮ ಪತ್ರದಲ್ಲಿ ತಿಳಿಸಿರುವಂತೆ ಯಡಗೆರೆ-ನಾಗರಮಕ್ಕಿ ಗ್ರಾಮಗಳಿಗೆ ಕಳೆದ ಆಗಸ್ಟ್ ತಿಂಗಳು ವಿಪರೀತ ಮಳೆಗಾಳಿಯ ಪರಿಣಾಮ ವಿದ್ಯುಚ್ಛಕ್ತಿ ಸರಬರಾಜಿನಲ್ಲಿ ಅಡಚಣೆಯಾಗಿದ್ದು ಅದನ್ನು ಈಗ ಸರಿಪಡಿಸಿ ವಿದ್ಯುಚ್ಛಕ್ತಿ ಸರಬರಾಜು ಸುಗಮಗೊಳಿಸಲಾಗಿದೆ.

2ನೆಯದಾಗಿ, ಅದೇ ಗ್ರಾಮದ ತೋಟದವರೇ 2 ಕಂಬಗಳನ್ನು ಒಯ್ದಿದ್ದಾರೆ. ಅದರಲ್ಲಿ ಒಂದು ಕಂಬದ ಕೆಲಸ ಮುಗಿದಿದ್ದು, ಇನ್ನೊಂದರ ಕೆಲಸವನ್ನು ಅತಿ ಶೀಘ್ರದಲ್ಲಿ ಮಾಡಿಸುತ್ತೇನೆ. ಈ ಬಗ್ಗೆ ನಾನೇ ಖುದ್ದಾಗಿ ತೋಟದ ಮಾಲೀಕರನ್ನು ಭೇಟಿಯಾಗಿ ಚರ್ಚಿಸಿದ್ದು, ಅವರು ಕೆಲಸಕ್ಕೆ ಸಿದ್ಧತೆ ಮಾಡಿ ದಿನ ತಿಳಿಸಿದೊಡನೆ ಕೆಲಸ ಮಾಡಿ ಮುಗಿಸುತ್ತೇವೆ.

(ಸಹಿ) ಶಾಖಾಧಿಕಾರಿ,
ಕ. ವಿ. ಮಂ., ನ.ರಾ. ಪುರ

# ಜಾತ್ಯತೀತ ಪ್ರಧಾನಿಯ 'ಧಾರ್ಮಿಕ' ಪ್ರವಾಸ?

ಮಾನ್ಯರೆ,

"ಕೆಲವು ಸಂಸ್ಥೆಗಳು ಕೋಮು ಸೌಹಾರ್ದಕ್ಕೆ ಧಕ್ಕೆ ತರುತ್ತಿವೆ" ಎಂದು ವೇದಿಕೆಯ ಮೇಲೆ ಹೇಳುವ 'ಜಾತ್ಯತೀತ' ದೇಶದ ಪ್ರಧಾನಿಯೊಬ್ಬರು 'ಧಾರ್ಮಿಕ' ನಾಯಕರೊಬ್ಬರ ಜೀವನ್ಮುಕ್ತಿಗೆ ತನ್ನ ಪಟಾಲಂ ಸಹಿತ ಭೇಟಿ ನೀಡಿದ್ದು ನೋಡಿದರೆ, ಮುಂದಿನ ಚುನಾವಣೆಯ ಪೂರ್ವತೆಯು ಅರಿವಾಗುತ್ತದೆ. ಆಸ್ತಿಕ ವಾದಿಗಳ ಕರುಣೆಯ ನೋಟಕ್ಕೆ ಬೀಳಲು ಹವಣಿಸಿದ ರಾಜೀವರ ಈ ಬಾಲಿಶತನಕ್ಕೆ ಮರುಗಬೇಕೋ, ಅಥವಾ ಶತಶತಮಾನಗಳ ಹಿಂದಿನಂತೆಯೇ ಈಗಲೂ ಉನ್ನತೋನ್ನತ ಆಡಳಿತಗಾರರನ್ನು ಕಿರು ಬೆರಳ ತುದಿಯಲ್ಲಿ ಕುಣಿಸಲು ಹವಣಿಸುವ 'ಧಾರ್ಮಿಕ' ವರ್ಗಗಳ ಪ್ರಾಬಲ್ಯಕ್ಕೆ ಬೆಂಗಾಗಬೇಕೋ ತಿಳಿಯುವುದಿಲ್ಲ.

ವಿಜ್ಞಾನ, ತಂತ್ರಜ್ಞಾನ, 21 ನೇ ಶತಮಾನ ಎಂದು ಬಡಬಡಿಸುವ ಈ ಪ್ರಧಾನಿಗೆ ಪ್ರವಾಹ, ಭೂಕಂಪಗಳಂಥ ಅನಾಹುತಗಳಿಗೆ ಅಥವಾ ಗಲಭೆಗಳಿಗೆ ಒಳಗಾಗುವ ಜನಸಾಮಾನ್ಯರನ್ನು ಸಂತೈಸಲು ಹೋಗುವುದಕ್ಕೆ ಪುರುಸೊತ್ತಾಗದಿದ್ದರೂ ಇಂಥ 'ಧಾರ್ಮಿಕ' ಪ್ರವಾಸಗಳಿಗೆ ಏನೂ ಅಡ್ಡಿಯಿಲ್ಲವಲ್ಲ!? ಇದಕ್ಕಾಗಿ ಖರ್ಚಾಗುವ 2 ಕೋಟಿಗೂ ಮಿಕ್ಕ ಹಣ, ರಕ್ಷಣಾ ವ್ಯವಸ್ಥೆ, ಅಧಿಕಾರಿ-ಸಿಬ್ಬಂದಿ ವರ್ಗದವರ 'ಸಮಯ-ಶ್ರಮ' ವ್ಯರ್ಥವಾಗುವುದು ಮುಂತಾದ ನಷ್ಟವೆಲ್ಲ ಈ ಬಡ ದೇಶದ ಬಡ ಪ್ರಜೆಗಳ ತಲೆಗೇ ಅಲ್ಲವೆ?

"ಭಾರತ ಸರ್ಕಾರವೇ ಶೃಂಗೇರಿಗೆ ಬಂದಿರಬೇಕಾದರೆ ನಾವು ಎಂಥವರ ನೆರಳಿನಲ್ಲಿದ್ದೇವು!" ಎಂದು ಉದ್ಗರಿಸಿದ, ಇಂಥದೊಡ್ಡಣೆಯ ವಿಜಯಕ್ಕೆ ಹಾರೈಸಿದ, ಶೃಂಗೇರಿಯ ಕೆಲ ಭಟ್ಟಂಗಿಗಳ ಸಮಯಸಾಧಕತನಕ್ಕೆ ಏನೆನ್ನೋಣ?

ಇದೀಗ 19ಕ್ಕೆ ಹೊಸ ಸ್ವಾಮಿಗಳ ಪಟ್ಟಾಭಿಷೇಕವಂತೆ. ಕಡೇ ಪಕ್ಷ ತರಳಬಾಳು, ಪೇಜಾವರ, ಆದಿಚುಂಚನಗಿರಿಯಂಥ ಮಠಾಧೀಶರಂತೆ ಇವತ್ತಿನ ವಾಸ್ತವತೆಯ ಸಮಸ್ಯೆಗಳಿಗೆ, ಸಾಮಾಜಿಕ ಪಿಡುಗುಗಳಿಗೆ ಸ್ವಲ್ಪವಾದರೂ ಗಮನ ಕೊಡದ ಇಂಥ ಸ್ವಾಮಿಗಳು ಈ ಬಡ ಭಾರತಕ್ಕೆ ಅಗತ್ಯವೆ? ಅಂಧ ಶ್ರದ್ಧೆ, ಅಜ್ಞಾನ, ಜಾತಿ ಭೇದಗಳ ಕೆಸರಲ್ಲೇ ಹೂತುಕೊಂಡಿರುವ ನಮ್ಮ ಸಮಾಜಕ್ಕೆ ಇಂಥದೇ ಕಾರ್ಯಕ್ರಮಗಳ ಸರಮಾಲೆಯಿಂದ ಮುಕ್ತಿ ಎಂದು?

—'ತಿರುಕ', ಶೃಂಗೇರಿ.

# ಮಲೆನಾಡು ಕಾಫಿ ಕ್ಯೂ॥ ವರ್ಕ್ಸ್‌ನಲ್ಲಿ 60 ಲಕ್ಷ ರೂ. ಬೆಲೆಯ ಆಧುನಿಕ ಕಾಫಿ ಸಂಸ್ಕರಣ ಯಂತ್ರ ಜೋಡಣೆ

ಚಿಕ್ಕಮಗಳೂರು : ಇಲ್ಲಿನ ಮಲೆನಾಡು ಕಾಫಿ ಕ್ಯೂರಿಂಗ್ ವರ್ಕ್ಸ್ ನಲ್ಲಿ ಬ್ರೆಜಿಲ್‌ನ ಆಧುನಿಕ ಸಂಸ್ಕರಣ ಯಂತ್ರದ ಕಾರ್ಯಾರಂಭ ಅ. 7 ರಂದು ನೆರವೇರಿತು. 60 ಲಕ್ಷ ರೂ. ಬೆಲೆಯ ಇಂಥ ಯಂತ್ರವನ್ನು ಹೊಂದಿರುವ ದೇಶದ ಎರಡನೇ ಸಂಸ್ಥೆ ಇದಾಗಿದೆ.

ಈ ಸಂಸ್ಕರಣ ಕೇಂದ್ರದ ಈವರೆಗಿನ ಹಲ್ಲಿಂಗ್ ಸಾಮರ್ಥ್ಯ 6250 ಟನ್ ಇದ್ದುದು, ಈಗ 10,000 ಟನ್‌ಗಳಿಗೆ ಏರಲಿದ್ದು, ಇದರಿಂದ ಮಳೆಗಾಲಕ್ಕೆ ಮೊದಲೇ 6000 ಟನ್ ಅರೇಬಿಕಾ ಪಾರ್ಚ್‌ಮೆಂಟ್ ಕಾಫಿಯ ಪೂರ್ಣ ಸಂಸ್ಕರಣೆ ಸಾಧ್ಯವಾಗಿ, ಮಳೆಗಾಲದಲ್ಲಿ ಪಾರ್ಚ್‌ಮೆಂಟ್ ಕಾಫಿ ಗುಣಮಟ್ಟ ಕೆಡುವ ಸಮಸ್ಯೆ ನಿವಾರಣೆಯಾಗುವುದೆಂದು ಸಂಸ್ಥೆಯ ಆಡಳಿತ ನಿರ್ದೇಶಕ ಕೆ. ಮೋಹನ್ ಪತ್ರಿಕಾ ಗೋಷ್ಠಿಯಲ್ಲಿ ತಿಳಿಸಿದರು.

ಕಾಫಿಯಲ್ಲಿ ಬರುವ ಕಲ್ಲು, ಗಾಜು, ಕಬ್ಬಿಣದ ತುಂಡು ಮತ್ತು ಧೂಳನ್ನು ಸುಲಭವಾಗಿ ಪ್ರತ್ಯೇಕಿಸುವುದಲ್ಲದೆ, ಬೀಜದಲ್ಲಿ ಶಾಖ ಉತ್ಪತ್ತಿಯಾಗದಂತೆಯೂ, ಕಾಫಿ ಬೀಜ ಒಡೆಯದಂತೆಯೂ ಹಲ್ಲಿಂಗ್ ಮಾಡುವುದು ಹಾಗೂ ತುಂಡು ಮತ್ತು ಜೊಳ್ಳು ಕಾಫಿಯನ್ನು ಪೂರ್ಣವಾಗಿ ಪ್ರತ್ಯೇಕಿಸಿ, ಕಾಫಿ ಬೀಜವನ್ನು ಅತ್ಯುತ್ತಮವಾಗಿ ವಿಂಗಡಿಸುವುದು ಈ ಯಂತ್ರದ ವೈಶಿಷ್ಟ್ಯಗಳೆಂದು ಮೋಹನ್ ತಿಳಿಸಿದರು.

ಈ ಯಂತ್ರ ಶೇ 30ರಷ್ಟು ವಿದ್ಯುತ್ ಬಳಕೆ ತಗ್ಗಿಸುವುದಲ್ಲದೆ 'ಎ' ದರ್ಜೆಯ ಅತ್ಯುತ್ತಮ ಕಾಫಿ ಬೀಜ ಪೂರೈಸಲೂ ಸಹಾಯಕವಾಗಿದ್ದು, ಇದರಿಂದ ಸಂಸ್ಥೆಯ 3000 ಮಂದಿ ಗ್ರಾಹಕ ಬೆಳೆಗಾರರಿಗೆ ಅತ್ಯಂತ ಅನುಕೂಲವಾಗಲಿದೆ ಎಂದೂ ಅವರು ಹೆಮ್ಮೆಯಿಂದ ಹೇಳಿದರು.

ಸಂಸ್ಥೆಯ ನಿರ್ದೇಶಕ ಮಂಡಳಿ ಅಧ್ಯಕ್ಷ ಎಚ್. ಬಿ. ಭೈರೇಗೌಡ ಮತ್ತು ನಿರ್ದೇಶಕ ಎಂ. ಎಸ್. ಚನ್ನಕೇಶವ ಗೌಡ ಅವರೂ ಗೋಷ್ಠಿಯಲ್ಲಿ ಹಾಜರಿದ್ದರು.

# ಅಡಿಕೆ ಬೆಳೆಗಾರರ ಸಂಘಗಳ ಪ್ರತಿನಿಧಿಗಳ ಸಮಾಲೋಚನಾ ಸಭೆ

ಅಡಿಕೆ ಬೆಳೆಗಾರರು ಎದುರಿಸುತ್ತಿರುವ ವಿವಿಧ ಸಮಸ್ಯೆಗಳು ಮತ್ತು ಅವುಗಳ ಪರಿಹಾರಕ್ಕೆ ಸೂಕ್ತ ಮಾರ್ಗೋಪಾಯ ಕಂಡುಕೊಳ್ಳುವ ದಿಸೆಯಲ್ಲಿ, ಕರ್ನಾಟಕ ರಾಜ್ಯ ಅಡಿಕೆ ಮಾರಾಟ ಸಹಕಾರ ಸಂಘಗಳ ಮತ್ತು ಅಡಿಕೆ ಬೆಳೆಗಾರರ ಸಂಘಗಳ ಪ್ರತಿನಿಧಿಗಳ ಒಂದು ದಿನದ ಸಮಾಲೋಚನಾ ಸಭೆಯೊಂದು 23-9-1989 ರಂದು ಶಿವಮೊಗ್ಗ ಮಲೆನಾಡು ಅಡಿಕೆ ಮಾರಾಟ ಸಹಕಾರ ಸಂಘದಲ್ಲಿ ನಡೆಯಿತು. ಮಂಗಳೂರಿನ ಕ್ಯಾಂಪ್ಕೊ ಸಂಸ್ಥೆ ಮ್ಯಾನೇಜಿಂಗ್ ಡೈರೆಕ್ಟರ್ ಎಂ. ಎಸ್. ಮುದ್ನೂರ್ ಈ ಸಭೆಯ ಅಧ್ಯಕ್ಷತೆ ವಹಿಸಿದ್ದರು. ಶಿವಮೊಗ್ಗ ಕ್ಷೇತ್ರದ ಲೋಕಸಭಾ ಸದಸ್ಯ ಟಿ. ವಿ. ಚಂದ್ರಶೇಖರಪ್ಪ ಸಭೆಯನ್ನು ಉದ್ಘಾಟಿಸಿದರು. ಶಿವಮೊಗ್ಗ ಜಿಲ್ಲಾಧಿಕಾರಿಗಳೂ ಮಾವಿನಕೋಸ್ ಅಧ್ಯಕ್ಷರೂ ಆದ ಎಂ. ಆರ್. ವಿಜಯ್ ಕುಮಾರ್ ಪ್ರಾಸ್ತಾವಿಕ ಭಾಷಣ ಮಾಡಿದರು.

ಸಾಂಪ್ರದಾಯಿಕವಾಗಿ ಅಡಿಕೆ ಬೆಳೆಯುವ, ವಿಶೇಷವಾಗಿ ನಾಲಾ ಪ್ರದೇಶದಲ್ಲಿ ಹೊಸದಾಗಿ ಅಡಿಕೆ ಬೆಳೆಯುತ್ತಿರುವುದರ ಸಮಸ್ಯೆ, ಅಡಿಕೆ ಬೆಲೆಯಲ್ಲಿರುವ ಏರಿಳಿತ ಮತ್ತು ದಿಢೀರ್ ಕುಸಿತ, ಕೆಂಗೆ ನೀತಿ, ಪ್ರಕೃತಿ ವಿಕೋಪ ಸಮಸ್ಯೆ, ಕ್ಯಾಂಪ್ಕೊ ಸಂಸ್ಥೆಯನ್ನು ಬಲಪಡಿಸುವಿಕೆ, ಅಡಿಕೆಯ ಪರ್ಯಾಯ ಉಪಯೋಗಗಳು, ಅಡಿಕೆ ಬೆಳೆಗಾರರಿಗೆ ಇರುವ ಕಾನೂನಿನ ತೊಡಕುಗಳು ಅಂದರೆ ಸಿ ಮತ್ತು ಡಿ ಭೂಮಿ, ಸೊಪ್ಪಿನ ಬೆಟ್ಟ, ನೀರು ದರ ವಸೂಲಾತಿ, ಬಗರ್ ಹುಕುಂ, ಅಡಿಕೆ ಬೆಳೆಗಾರರಿಗೆ ರಿಯಾಯತಿ ಬಡ್ಡಿ ದರದಲ್ಲಿ ಸಾಲ, ಸಾಗುವಳಿ ಮುಂತಾದ ಹಲವಾರು ವಿಷಯಗಳ ಬಗ್ಗೆ ಸಭೆಯಲ್ಲಿ ವಿವರವಾಗಿ ಚರ್ಚಿಸಿ, ನಿರ್ಣಯಗಳನ್ನು ಕೈಗೊಳ್ಳಲಾಯಿತು. ಈ ಸಭೆಯಲ್ಲಿ ರಾಜ್ಯದ ಎಲ್ಲಾ ಭಾಗಗಳಿಂದ ಅಡಿಕೆ ಮಾರಾಟ ಸಹಕಾರ ಸಂಘಗಳ ಮತ್ತು ಬೆಳೆಗಾರ ಸಂಘಗಳ ಪ್ರತಿನಿಧಿಗಳು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿದ್ದರು. ಸಭೆಯಲ್ಲಿ ಕೈಗೊಂಡ ನಿರ್ಣಯಗಳ ಬಗ್ಗೆ ಮುಂದಿನ ಕ್ರಮ ಕೈಗೊಳ್ಳುವ ಸಲುವಾಗಿ ಈ ಕೆಳಕಂಡವರನ್ನುಳ್ಳ ಒಂದು ಸಮಿತಿಯನ್ನು ರಚಿಸಲಾಯಿತು :

ವಾರಣಾಸಿ ಸುಬ್ರಾಯ ಭಟ್, (ಅಧ್ಯಕ್ಷರು), ಎಂ. ಹರನಾಥರಾವ್, ಸಾಗರ (ಪ್ರಧಾನ ಕಾರ್ಯದರ್ಶಿ), ಜಿ. ಜಿ. ಹೆಗಡೆ ಹುಲೇಮಳಗಿ, ಸಿರ್ಸಿ. ಆರ್. ಮರುಳಪ್ಪ, ಚನ್ನಗಿರಿ, ಎ. ಪಿ. ಭಟ್, ಅಡ್ವೊಕೇಟ್, ಸಿದ್ಧಾಪುರ ಎಚ್. ಎಸ್. ಮಂಜಪ್ಪ, ಮಾಮ್‌ಕೋಸ್, ಪಿ. ಜಿ. ಗುರ್ಜರ್, ಚಿಕ್ಕಮಗಳೂರು, ಟಿ ಎಸ್. ಚಂದ್ರಶೇಖರ ರಾವ್, ಸಾಗರ ಆರ್. ಆರ್. ಹೆಗಡೆ, ಶೀಗಳಮನೆ, ಯಲ್ಲಾಪುರ ಮತ್ತು ಎಲ್ಲಾ ಅಡಿಕೆ ಮಾರಾಟ ಸಹಕಾರ ಸಂಘಗಳ ಅಧ್ಯಕ್ಷರು (ಸದಸ್ಯರುಗಳು)

## ನೃತ್ಯ ಪ್ರದರ್ಶನ

(2ನೇ ಪುಟದಿಂದ)

ತ್ತಾನೋ ಆ 'ಸಂಸ್ಕೃತಿವಂತ'ರವನೇ ಒಬ್ಬನಾಗಿದ್ದರೆ ಈ ಹುಡುಗನ ಹರಕೆ ಈ ರೀತಿಯಲ್ಲಿ ಸಲ್ಲುತ್ತಿತ್ತೆ? ಕೇವಲ ಕೆಲವರ ... ಈ 'ಕಂಡ ಕುಸುವ' ... ಒಡೊಲಾಗಕ್ಕೆ 'ಮೈಲಿಗೆ' ... ನಮ್ಮ 'ಸಂಸ್ಕೃತಿ' ... ಇರಬಹುದೆ?

—ಕೃಷ್ಣ ...

# "ಚಕ್ಕಮುಕ್ಕಿ ಬಾವಾ ಸಾವಿಗೆ ಅರಣ್ಯ ಇಲಾಖೆ ಹೊಣೆಯಲ್ಲ"

(1ನೇ ಪುಟದಿಂದ)

ಉಸಿರು ಕಟ್ಟಿ ಸತ್ತಿದ್ದೆಂದು ದೃಢಪಡಿಸಿದ್ದರು. ಆಗ ಪೋಲೀಸ್ ಅಧಿಕಾರಿ 'ಕಂಪ್ಲೇಂಟ್ ಕೊಡುವಿರಾ?' ಎಂದು ಕೇಳಿದರೂ ಏನೂ ಬೇಡವೆಂದು ತಿಳಿಸಿದ್ದರು.

ಅಲ್ಲದೆ ಆತನ ದೇಹದ ಮೇಲಿದ್ದ ಅಂಗಿ ಅವನದಾಗಿರಲಿಲ್ಲ. ಆಗ ಅಲ್ಲಿದ್ದ ಅವರ ಇನ್ನೊಬ್ಬ ಸಂಬಂಧಿ, ಬಾವ ತನ್ನ ಅಂಗಿ ಹಾಕಿಕೊಂಡು ಹೋಗಿದ್ದನೆಂದು ಆ ಅಂಗಿಯನ್ನು ಗುರುತು ಹಿಡಿದ ಮೇಲೆಯೇ ಅದು ಬಾವನ ಶವವೆಂದು ಖಚಿತವಾದದ್ದು.

**ಶವದ ಕಾಲು ತುಂಡಾಗಿರಲಿಲ್ಲ**

ಗಂಧದ (ಕಳ್ಳ) ಲಾಬಿ ಪುಕಾರು ಹಬ್ಬಿಸಿರುವಂತೆ ಶವದ ಕಾಲು ತುಂಡಾಗಿರಲಿಲ್ಲ. ಶವ ಕೊಳೆತಿದ್ದರಿಂದ ಪಾದದ ಬಳಿಯ ಮಾಂಸ ಮಾತ್ರ ಒಂದಷ್ಟು ಉದುರಿ ಹೋಗಿತ್ತು; ಕಾಲಿನ ಪೂರ್ಣ ಮೂಳೆಗಳು ಯಥಾವತ್ ಇದ್ದವು. ('ಗುಂಡಿನ ನಂಜೇರಿ ಆತ ಸತ್ತಾಗ ಗುಂಡು ಬಿದ್ದ ಗುರುತು ಪತ್ತೆಯಾಗಬಾರದೆಂದು ಕಾಲನ್ನು ಕತ್ತರಿಸಿದ್ದರು' ಎಂದು ಪುಕಾರು ಹಬ್ಬಿಸಲಾಗಿದೆ.)

ಮೂರ್ನಾಲ್ಕು ದಿನ ಬಿಟ್ಟು ಅಬ್ಬಾಸ್ ಪೋಲೀಸಿಗೆ ದೂರು ನೀಡಿದಾಗ, ಮೊದಲು ಕಂಪ್ಲೇಂಟ್ ಕೊಡುವುದಿಲ್ಲವೆಂದು ಹೇಳಿ ಈಗ ಕೊಡುತ್ತಿರುವುದಕ್ಕೆ ಅಧಿಕಾರಿ ಕಾರಣ ಕೇಳಿದ್ದಕ್ಕೆ, "ಉಳಿದ ಅರಣ್ಯ ಕಂಟ್ರಾಕ್ಟರುಗಳು ಒತ್ತಾಯಿಸುತ್ತಿದ್ದಾರೆ; ಅದಕ್ಕೆ" ಎಂದು ಆತ ಸ್ಪಷ್ಟಪಡಿಸಿದ್ದರು.

**ಉದ್ದೇಶವೇನು ?**

ಗಂಧದ ಕಳ್ಳ ಸಾಗಣೆಯ ಉದ್ದೇಶವಲ್ಲದಿದ್ದರೆ ಆ ರಾತ್ರಿ ಅಂಥ ನಿರ್ಜನ ಪ್ರದೇಶದಲ್ಲಿ (ಕಾರು ಹೋಗದ ಗುಡ್ಡದ ಮೇಲೆ) ಆವರು ಅಡ್ಡಾಡುತ್ತಿರಲು ಏನು ಕಾರಣ ಎಂದೂ ಈ ಮೂಲಗಳ ಪ್ರಶ್ನೆ. ಅಥವಾ ಈಗಾಗಲೇ ಈ ಪ್ರದೇಶದಲ್ಲಿ ಗುಸು ಗುಸು ಹಬ್ಬಿರುವಂತೆ, ಹುಡುಗಿಯೊಬ್ಬಳ ಸಂಬಂಧವೂ ಇದರಲ್ಲಿ ತಳುಕು ಹಾಕಿಕೊಂಡಿದ್ದು, ಅದು ಬಾವನ ಸಾವಿನಲ್ಲಿ ಪರ್ಯವಸಾನಗೊಂಡಿರಬಹುದೆ ?

ಸಿಒಡಿ ತನಿಖೆಯ ಫಲಿತಾಂಶವೊಂದೇ ಈ ಎಲ್ಲ ಪ್ರಶ್ನೆ, ಸಂದೇಹ, ಕುತೂಹಲಗಳಿಗೂ ಉತ್ತರಿಸಬಲ್ಲುದೆಂದು ನಿರೀಕ್ಷಿಸಲಾಗುತ್ತಿದೆ.

## 35 ಸಾವಿರ ರೂ. ಬೆಲೆಯ ಗಂಧ ವಶ, ಕಾರು ಜಪ್ತಿ

ನ.ರಾ. ಪುರ: ಮುಡುಬ ಸನಿಹದ ಗಂಧ ಕಳ್ಳ ಸಾಗಣೆ ಮಾಡುತ್ತಿದ್ದ ಅಂಬಾಸಿಡರ್ ಕಾರೊಂದನ್ನು (ಸಿಎಎ 3530) ಆ 11ರ ಬೆಳಗಿನ ಜಾವ 5 ಗಂಟೆ ಹೊತ್ತಿನಲ್ಲಿ ಇಲ್ಲಿನ ವಲಯ ಅರಣ್ಯಾಧಿಕಾರಿ ಜವರೇಗೌಡ, ಮತ್ತು ಸಿಬ್ಬಂದಿ ವಶಪಡಿಸಿಕೊಂಡಿದ್ದಾರೆ.

ಕಾರಿನಲ್ಲಿ 35 ಸಾವಿರ ರೂ. ಬೆಲೆಯ ಸುಮಾರು 370 ಕಿಲೋ ಗಂಧ ಪತ್ತೆಯಾಗಿದ್ದು, ಆರೋಪಿಗಳು ತಪ್ಪಿಸಿಕೊಂಡಿದ್ದಾರೆ.

ಫಾರೆಸ್ಟರ್ ಹನುಮಂತಪ್ಪ, ಗಾರ್ಡ್‌ಗಳಾದ ವೆಂಕಟೇಶ್, ತೊಳಸೇ ನಾಯ್ಕ, ಚಂದ್ರಶೇಖರ ಇವರುಗಳು ದಾಳಿಯಲ್ಲಿ ಭಾಗವಹಿಸಿದ್ದರು.

## ವನ್ಯ ಪ್ರಾಣಿ ಸಪ್ತಾಹ

ಕೊಪ್ಪ : ಅ 1ರಿಂದ 7ರವರೆಗೆ ವನ್ಯ ಪ್ರಾಣಿ ಸಪ್ತಾಹದ ಅಂಗವಾಗಿ ಇಲ್ಲಿನ ಅರಣ್ಯ ಇಲಾಖೆ ಮತ್ತು ಜೂನಿಯರ್ ಛೇಂಬರ್ ಸಂಯುಕ್ತ ಆಶ್ರಯದಲ್ಲಿ ಶಾಲಾ-ಕಾಲೇಜು ಮಕ್ಕಳಿಗಾಗಿ ರಸಪ್ರಶ್ನೆ, ಪ್ರಬಂಧ ಮತ್ತು ಸ್ಥಳದಲ್ಲೇ ಚಿತ್ರ ಬರೆಯುವ ಸ್ಪರ್ಧೆಗಳು ನಡೆದವು.

ಅ. 7ರಂದು ಎಚ್. ಜಿ. ಗೋವಿಂದಗೌಡರ ಅಧ್ಯಕ್ಷತೆಯಲ್ಲಿ ನಡೆದ ಮುಕ್ತಾಯ ಸಮಾರಂಭದಲ್ಲಿ ಬಿ. ಜ. ಚಿದಂಬರ್, ಎಸಿಎಫ್ ಬಾಲಕೃಷ್ಣ, ಎ. ಟಿ. ಚಾಮರಾಜ್ ಮುಖ್ಯ ಅತಿಥಿಗಳಾಗಿದ್ದರು. ಜೇಸಿ ಅಧ್ಯಕ್ಷ ಶ್ರೀನಿವಾಸರಾವ್ ಕಾರ್ಯಕ್ರಮ ನಿರ್ವಹಿಸಿದರು.

ಕೊನೆಯಲ್ಲಿ ವನ್ಯಜೀವಿಗಳ ಜೀವನ ಮತ್ತು ಸಂರಕ್ಷಣೆ ಕುರಿತು ಸಾಕ್ಷ್ಯ ಚಿತ್ರಗಳನ್ನು ತೋರಿಸಲಾಯಿತು.

## 26 ಸಾವಿರ ರೂ. ಅಕ್ರಮ ಹೊನ್ನೆ ಮರ ವಶ

ಬಾಳೆಹೊನ್ನೂರು : ಇಲ್ಲಿಗೆ ಸನಿಹದ ಮಾಗುಂಡಿ ಬಳಿಯ ಕೂಡಲಿಯಲ್ಲಿ ಟಿಂಬರ್ ಕಂಟ್ರಾಕ್ಟರ್-ಕಂ-ಕಳ್ಳ ಸಾಗಣೆದಾರ ಎನ್ನಲಾಗಿರುವ ಕೂಡಲಿ ಸುಧಾಕರ ಎಂಬ ವ್ಯಕ್ತಿ ತನ್ನ ಜಮೀನಿನ ಒತ್ತುವರಿಯಲ್ಲಿ ಅಕ್ರಮವಾಗಿ ಕಡಿಸಿದ್ದ 9 ಹೊನ್ನೆ ಮರಗಳನ್ನು ಅರಣ್ಯ ಸಿಬ್ಬಂದಿ ವಶಪಡಿಸಿಕೊಂಡಿದ್ದಾರೆ.

ಉತ್ತಮ ದರ್ಜೆಯ ಸುಮಾರು 37 ತುಂಡುಗಳಿದ್ದ ಈ ನಾಟದ ಮೌಲ್ಯ 26 ಸಾವಿರ ರೂ ಎಂದು ಅಧಿಕಾರಿಗಳು ಅಂದಾಜು ಮಾಡಿದ್ದು, ಸುಧಾಕರನನ್ನು ಬಂಧಿಸಿ ಜಾಮೀನಿನ ಮೇಲೆ ಬಿಡಲಾಗಿದೆ ಎಂದು ತಿಳಿದು ಬಂದಿದೆ. ಪ್ರಕರಣ ನ್ಯಾಯಾಲಯಕ್ಕೆ ಹೋಗಿದೆ.

ಮೂಡಿಗೆರೆಯ ಎಸಿಎಫ್, ರೇಂಜರ್, ಕುದ್ರೆಮುಖ ಎಸಿಎಫ್-ಮತ್ತು ಕೊಪ್ಪ ಸಂಚಾರಿ ದಳದ ಸಿಬ್ಬಂದಿಗಳು ಅ. 3ರಂದು ಬೆಳಗ್ಗೆ ದಾಳಿ ನಡೆಸಿ ಈ ನಾಟಾ ವಶಪಡಿಸಿಕೊಂಡಿದ್ದರು. (ಈ ಕಳ್ಳ ನಾಟದ ಸುಳಿವು ನೀಡಿದ್ದರಲ್ಲಿ 'ಮುಂಜಾವು' ಕೈವಾಡ ಇಬಹುದೆಂದು ಶಂಕಿಸಬಹುದಾಗಿದೆ !?)

## ಪ.ಜಾತಿ/ವರ್ಗ ನೌಕರರ ಸಂಘ ಪುನರ್ರಚನೆ

ಕೊಪ್ಪ: ಈ ತಾಲ್ಲೂಕಿನ ಪರಿಶಿಷ್ಟ ಜಾತಿ/ವರ್ಗಗಳ ನೌಕರರ ಸಂಘದ ಹೊಸ ಪದಾಧಿಕಾರಿಗಳು: ರಂಗಸ್ವಾಮಿ (ಗೌರವಾಧ್ಯಕ್ಷ), ಎ. ಡಿ. ರಂಗಪ್ಪ (ಅಧ್ಯಕ್ಷ), ಮಾಳಪ್ಪ (ಉಪಾಧ್ಯಕ್ಷ), ಕೆ. ಲೋಕೇಶ್ವರ (ಪ್ರಧಾನ ಕಾರ್ಯದರ್ಶಿ), ಎಂ. ಆರ್ ಚನ್ನವೀರಯ್ಯ (ಸಹ ಕಾರ್ಯದರ್ಶಿ), ಸ್ವಾಮಿ (ಸಂಘಟನಾ ಕಾರ್ಯದರ್ಶಿ), ಕೆ. ಬಿ. ದೇವಪ್ಪ (ಖಜಾಂಚಿ) ಮತ್ತು 6 ಜನ ಕಾರ್ಯಕಾರಿ ನಿರ್ದೇಶಕರು.

ಕೊಪ್ಪ, ಶೃಂಗೇರಿ, ನ. ರಾ. ಪುರ ಈ ಮೂರೂ ತಾ||ಗಳಲ್ಲಿ ಸಂಘದ ಸಂಘಟನೆಗಾಗಿ ಸಂಘಟನಾ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ 5 ಜನರ ಸಮಿತಿಯೊಂದನ್ನು ರಚಿಸಲಾಗಿದೆ.

ಸಂಘದ ಪ್ರಾರಂಭದಲ್ಲಿ ಪ್ರಧಾನ ಕಾರ್ಯದರ್ಶಿಯಾಗಿದ್ದ ವಿ. ರಾಮಕೃಷ್ಣ ಅವರು ಸ್ಥಾನ ತೆರವುಗೊಳಿಸಿ, ಅವರೆದುರೇ ನೂತನ ಪದಾಧಿಕಾರಿಗಳು ಆಯ್ಕೆಯಾಗಿದ್ದು, ಮೂರೂ ತಾ||ಗಳ ಪ ಜಾತಿ/ವರ್ಗಗಳ ನೌಕರರು ಅವರೊಂದಿಗೆ ಸಂಘದ ಬಗ್ಗೆ ಯಾವುದೇ ರೀತಿ ವ್ಯವಹರಿಸಬಾರದೆಂದು ಸಂಘ ಎಚ್ಚರಿಸಿದೆ.

## 'ಲ್ಯಾಂಪ್ಸ್' ನಾಯಕತ್ವ ಶಿಬಿರ

ಕೊಪ್ಪ, ಮೂಡಿಗೆರೆ, ಬೆಳ್ತಂಗಡಿ ಮತ್ತು ಕಾರ್ಕಳ ತಾ||ಗಳ ಗಿರಿಜನ ವಿವಿಧೋದ್ದೇಶ ಸಹಕಾರ ಸಂಘಗಳ (ಲ್ಯಾಂಪ್ಸ್) ಅಧ್ಯಕ್ಷರು ಮತ್ತು ನಿರ್ದೇಶಕರ ನಾಯಕತ್ವ ಶಿಬಿರ ಕೊಪ್ಪ ಲ್ಯಾಂಪ್ಸ್ ಆಶ್ರಯದಲ್ಲಿ ನಡೆಯಿತು. ಅಧ್ಯಕ್ಷತೆ ವಹಿಸಿದ್ದ ತಾ| ಪಂ| ಸಮಿತಿ ಅಧ್ಯಕ್ಷ ಕೆ.ಎಸ್. ಕಾಡಪ್ಪಗೌಡರು ಸಂಘದ ಉಗ್ರಾಣಕ್ಕೆ ನಿವೇಶನ ನೀಡುವುದಾಗಿ ಭರವಸೆಯಿತ್ತರು.

ಜೆ ಪಿ. ನೀಲಕಂಠಭಟ್ ಅಧ್ಯಕ್ಷತೆಯಲ್ಲಿ ನಡೆದ ಮುಕ್ತಾಯ ಸಮಾರಂಭದಲ್ಲಿ ಮಾಜಿ ಸಚಿವ ಗೋವಿಂದಗೌಡರು ಸಮಾರೋಪ ಭಾಷಣ ಮಾಡಿದರು. ಕೆ. ಎಂ. ಶ್ರೀನಿವಾಸ್, ವಾಸಪ್ಪಗೌಡ, ಬಿಡಿಒ ಎ. ರಾಮಮೂರ್ತಿ, ಚಿಕ್ಕಮಗಳೂರು ಮತ್ತು ದ. ಕ. ಜಿಲ್ಲಾ ಪರಿಷತ್‌ಗಳ ಕೆಲ ಸದಸ್ಯರು ಹಾಜರಿದ್ದರು.

## ಶ್ರಮದಾನದ ಮೂಲಕ ಪ್ರತಿಭಟನೆ

ಶೃಂಗೇರಿ : ನೆಮ್ಮಾರಿನಿಂದ ಬುಕ್ಕಡಿಬೈಲು ರಸ್ತೆ ಜಿಲ್ಲಾ ಪರಿಷತ್ತು ಮತ್ತು ಲೋಕೋಪಯೋಗಿ ಇಲಾಖೆಗೆ ಸೇರಿದ್ದು, ಇದನ್ನು ದುರಸ್ತಿ ಮಾಡಿ ಟಾರು ಹಾಕಿಸಲು ಈ ಇಲಾಖೆಗಳು ಆಸಕ್ತಿ ವಹಿಸದಿದ್ದುದರಿಂದ ಅ. 8ರಂದು ಸುತ್ತಲ ಗ್ರಾಮಗಳ ಸುಮಾರು 70 ಜನರು ಶ್ರಮದಾನ ಮಾಡಿ ರಸ್ತೆ ರಿಪೇರಿ ಮಾಡಿದರು.

**ವಾಹನ ಸಂಚಾರಕ್ಕೆ ಒತ್ತಾಯ**

ಕಿಗ್ಗದಿಂದ ಬೋಳೂರು ಮಾರ್ಗವಾಗಿ ಆಗುಂಬೆ ರಸ್ತೆಗೆ ಸೇರುವ ಗ್ರಾಮಾಂತರ ರಸ್ತೆಯ ಮೂಲಕ ಬಸ್ ಸಂಚಾರ ಏರ್ಪಡಿಸಿ ಈ ಭಾಗದ ಜನರಿಗೆ ಪ್ರಯೋಜನ ಕಲ್ಪಿಸಬೇಕೆಂದು ಜನತೆ ಸಂಬಂಧಪಟ್ಟವರನ್ನು ಒತ್ತಾಯಿಸಿದ್ದಾರೆ.

(ವರದಿ : ಎಂ.ವಿ. ಗಂಗಾಧರ್)

## ಪೌಷ್ಟಿಕ ಆಹಾರ ತರಬೇತಿ, ಮಕ್ಕಳ ಮೇಳ

ಜಯಪುರ : ಇಲ್ಲಿಗೆ ಸಮೀಪದ ಕೂಳೂರು ಅಂಗನವಾಡಿಯಲ್ಲಿ ಅ 3ರಂದು ಪೌಷ್ಟಿಕ ಆಹಾರ ತಯಾರಿಕಾ ಶಿಬಿರ ಮತ್ತು ಮಕ್ಕಳ ಮೇಳ ನಡೆಯಿತು.

ಸಮಾರಂಭದ ಅಧ್ಯಕ್ಷತೆಯನ್ನು ಜಯಪುರ ಮಂಡಲ ಉಪಪ್ರಧಾನ ಎಸ್. ಎ. ಸುಂದರ್ ವಹಿಸಿದ್ದರು. ಮಂಡಲ ಪಂಚಾಯಿತಿ ಸದಸ್ಯರುಗಳಾದ ಎಂ. ಟಿ. ನಾರಾಯಣ ಮತ್ತು ಲೀಲಾ ಮುಖ್ಯ ಅತಿಥಿಗಳಾಗಿದ್ದರು. ಜಯಪುರ ಅಂಗನವಾಡಿ ಮೇಲ್ವಿಚಾರಕಿ ಶಕುಂತಲ, ಬಸ್ರಿಕಟ್ಟೆ ಮೇಲ್ವಿಚಾರಕಿ ಲೂಸಿ ಡಿ'ಸೋಜ ಉಪಸ್ಥಿತರಿದ್ದರು. ಅಂಗನವಾಡಿ ತರಬೇತಿದಾರರಾದ ಖತೀಜಾ ಬೇಗಂ ಸ್ವಾಗತಿಸಿ, ಕಾರ್ಯಕರ್ತೆ ವಂದಿಸಿದರು. ಮಕ್ಕಳಿಂದ ಮನರಂಜನಾ ಕಾರ್ಯಕ್ರಮ ನಡೆಯಿತು.

(ಎಂ ವಿ. ಗಂಗಾಧರ್)

## ನಾಪತ್ತೆಯಾಗಿದ್ದ ಮಂ| ಸದಸ್ಯ

ನಿಲುವಾಗಿಲು: ಇಲ್ಲಿನ ಮಂಡಲ ಪಂಚಾಯ್ತಿ ನಾಮನಿರ್ದೇಶನ ಸದಸ್ಯ ರಾಜು ಮೂಲ್ಯ ಅವರ ವಿರೋಧಿಗಳು ಈಚೆಗೆ ಅವರನ್ನು ಕೈ ಕಾಲು ಕಟ್ಟಿ ಹಾಕಿ, ಅವರ ಬಳಿ ಗಂಧದ ಹೊರೆ ಇಟ್ಟು, ಗಾರ್ಡ್‌ಗೆ ಹೇಳಿ ಅವರನ್ನು ಕೂಡಿ ಹಾಕಿದ್ದಾಗ ತಪ್ಪಿಸಿಕೊಂಡು ಹೋಗಿ ತಲೆ ಮರೆಸಿಕೊಂಡಿದ್ದ ಮೂಲ್ಯ ಅನಂತರ ಮಂಡಲ ಪ್ರಧಾನರ ನೆರವಿನಿಂದ ಪೋಲೀಸರ ಮುಂದೆ ಹಾಜರಾಗಿ ಪ್ರಕರಣ ಕೊನೆಗೊಳಿಸಲಾಯಿತೆಂದು ತಿಳಿದು ಬಂದಿದೆ. ಗಂಧವನ್ನು ನಿಜವಾಗಿ ಕಡಿದವರು ಯಾರೆಂಬುದನ್ನು ಗಾರ್ಡ್ ಪತ್ತೆ ಮಾಡಿದ್ದಾರೋ ಇಲ್ಲವೋ ತಿಳಿದು ಬಂದಿಲ್ಲ.

## ಪೇಟೆ ಧಾರಣೆ

**ಅಡಿಕೆ**

ಶಿವಮೊಗ್ಗ : 12-10-1989
ಸರಕು : 3139-3706
ಬೆಟ್ಟೆ : 2511-2839
ಗೊರಬಲು : 1261-1599
ಸಾಗರ : 12.10.1989
ಇಡಿ : 2337-2569
ಚಾಲಿ : 2609-2869
ಆಪಿ : 3282-3479
ಸಿಪ್ಪೆ ಗೋಟು : 756-979



ಸಂಪಾದಕ, ಮುದ್ರಕ ಮತ್ತು ಪ್ರಕಾಶಕ : ಸಿರಿಮನೆ ನಾಗರಾಜ್, ಅಚ್ಚು : ಏಟಿಗೆ ಅಚ್ಚು ಕೂಟ, ಕೊಪ್ಪ.